# ಕರ್ನಾಟಕ ವಿಧಾನ ಪರಿಷತ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 649

ಸದಸ್ಯರ ಹೆಸರು : ಶ್ರೀ ಆರ್.ಬಿ.ತಿಮ್ಮಾಪುರ

(ವಿಧಾನಸಭಾ ಕ್ಷೇತ್ರದಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 04.03.2021

| ಕ್ರ. ಸಂ: | ಪ್ರಶ್ನೆ | ಉತ್ತರ |
|---|---|---|
| ಅ) | ಬಾಗಲಕೋಟೆ ಜಿಲ್ಲೆ, ಮುಧೋಳ ತಾಲ್ಲೂಕಿನ ವ್ಯಾಪ್ತಿಯಲ್ಲಿ ಕೃಷ್ಣಾ ಮೇಲ್ದಂಡೆ ಯೋಜನೆಯಡಿ ಮುಳುಗಡೆಯಾದ ಗ್ರಾಮಗಳ ಸಂಖ್ಯೆ ಎಷ್ಟು; (ತಾಲ್ಲೂಕುವಾರು/ ಗ್ರಾಮವಾರು ಮಾಹಿತಿಗಳನ್ನು ಒದಗಿಸುವುದು) | ಕೃಷ್ಣಾ ಮೇಲ್ದಂಡೆ ಯೋಜನೆಯ ಹಂತ-1 ಮತ್ತು 2 ರಲ್ಲಿ ಬಾಗಲಕೋಟ ಜಿಲ್ಲೆ, ಮುಧೋಳ ತಾಲ್ಲೂಕಿನ ಯಾವುದೇ ಗ್ರಾಮಗಳು ಮುಳುಗಡೆಯಾಗಿರುವುದಿಲ್ಲ.<br><br>ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-3ರಡಿ ಆಲಮಟ್ಟಿ ಜಲಾಶಯದ ನೀರಿನ ಸಂಗ್ರಹಣೆಯ ಮಟ್ಟವನ್ನು ಆರ್.ಎಲ್.519.60ಮೀ ರಿಂದ 524.256 ಮೀ ವರೆಗೆ ಎತ್ತರಿಸಿದಾಗ ಹಿನ್ನೀರಿನಲ್ಲಿ ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲ್ಲೂಕಿನ 5 ಗ್ರಾಮಗಳು ಅಂದರೆ ಮಾಚಕನೂರ, ಆಲಗುಂಡಿ ಬಿ.ಕೆ., ಬುದ್ನಿ ಬಿ.ಕೆ., ಚಿಕ್ಕೂರ ಮತ್ತು ಭಂಟನೂರ ಗ್ರಾಮಗಳು ಮುಳುಗಡೆ ವ್ಯಾಪ್ತಿಯಲ್ಲಿ ಬರುತ್ತವೆ. |
| ಆ) | ಈ ರೀತಿ ಮುಳುಗಡೆಯಾದ ಗ್ರಾಮಗಳಿಗೆ ಪುನರ್ವಸತಿ ಸೌಲಭ್ಯ ಕಲ್ಪಿಸಲಾಗಿದೆಯೇ; ಕಲ್ಪಿಸಿದ್ದಲ್ಲಿ ಯಾವ ಯಾವ ಸೌಲಭ್ಯಗಳನ್ನು ಒದಗಿಸಿಕೊಡಲಾಗಿದೆ; ಇದುವರೆಗೂ ಪುನರ್ವಸತಿ ಸೌಲಭ್ಯವನ್ನು ಒದಗಿಸಿಕೊಡಲು ಸಾಧ್ಯವಾಗದ ಗ್ರಾಮಗಳಾವುವು; | ಸದರಿ 05 ಗ್ರಾಮಗಳಿಗೆ ಪುನರವಸತಿ ಕಲ್ಪಿಸುವ ಕುರಿತು ಜಮೀನುಗಳು ಭೂಸ್ವಾಧೀನ ಪ್ರಕ್ರಿಯೆಯಲ್ಲಿದ್ದು ಅವುಗಳ ವಿವರ ಈ ಕೆಳಗಿನಂತಿವೆ.<br>1) **ಮಾಚಕನೂರ ಗ್ರಾಮ:-** ಈ ಗ್ರಾಮದ ಕಟ್ಟಡಗಳ/ಆಸ್ತಿಗಳ ಭೂಸ್ವಾಧೀನ ಪ್ರಕ್ರಿಯೆಯು ಆರ್.ಆರ್.ಎ.ಪಿ. ಹಂತದಲ್ಲಿರುತ್ತದೆ. ಪುನರವಸತಿ ಕೇಂದ್ರಕ್ಕಾಗಿ ವಜ್ಜರಮಟ್ಟಿ ಹಾಗೂ ಝುಂಜರಕೊಪ್ಪ ಗ್ರಾಮದ ಜಮೀನುಗಳ ಒಟ್ಟು ಕ್ಷೇತ್ರ 225.17.8 ಎ.ಗುಂ.ಆ. ಕ್ಷೇತ್ರಕ್ಕೆ ಐತೀರ್ಪು ಆಗಿದೆ. ಹಾಗೂ ಪುನರವಸತಿ ಕೇಂದ್ರದ ವಿನ್ಯಾಸ ನಕ್ಷೆ ತಯಾರಿಸುವ ಹಂತದಲ್ಲಿದೆ.<br>2) **ಆಲಗುಂಡಿ ಬಿ.ಕೆ. ಗ್ರಾಮ:-** ಈ ಗ್ರಾಮದ ಕಟ್ಟಡಗಳ/ಆಸ್ತಿಗಳ ಭೂಸ್ವಾಧೀನ ಪ್ರಕ್ರಿಯೆಯು ಪ್ರಸ್ತಾವನೆ ಹಂತದಲ್ಲಿರುತ್ತದೆ. ಆಲಗುಂಡಿ ಬಿ.ಕೆ. ಹಾಗೂ ಝುಂಜರಕೊಪ್ಪ ಗ್ರಾಮದ ಜಮೀನು ಒಟ್ಟು ಕ್ಷೇತ್ರ 202.18 ಎ.ಗುಂ. ಪ್ರಸ್ತಾವನೆ ಹಂತದಲ್ಲಿದೆ. (ಸದರಿ ಗ್ರಾಮವು ತಾಂತ್ರಿಕ ಪರಿಹಾರ ವ್ಯಾಪ್ತಿಯಲ್ಲಿರುತ್ತದೆ.)<br>3) **ಬುದ್ನಿ ಬಿ.ಕೆ. ಗ್ರಾಮ:-** ಈ ಗ್ರಾಮದ ಕಟ್ಟಡಗಳ/ಆಸ್ತಿಗಳ ಭೂಸ್ವಾಧೀನ ಪ್ರಕ್ರಿಯೆಯು ಪ್ರಸ್ತಾವನೆ ಹಂತದಲ್ಲಿರುತ್ತದೆ. ಬುದ್ನಿ ಬಿ.ಕೆ. ಗ್ರಾಮದ ಜಮೀನು ಒಟ್ಟು ಕ್ಷೇತ್ರ 99.01 ಎ.ಗುಂ. ಪ್ರಾಥಮಿಕ ಅಧಿಸೂಚನೆ ಹೊರಡಿಸಲಾಗಿದ್ದು ಜೆ.ಎಂ.ಸಿ. ತಯಾರಿಸುವ ಹಂತದಲ್ಲಿದೆ. |
| ಇ) | ಈ ಸಂಬಂಧ ಸರ್ಕಾರದ ಮುಂದೆ ದೂರುಗಳಿವೆಯೇ; ಈ ದೂರುಗಳ ಪರಿಹಾರಕ್ಕೆ ಸರ್ಕಾರ ಕೈಗೊಂಡ ಕ್ರಮಗಳೇನು? | 4) **ಚಿಕ್ಕೂರ ಗ್ರಾಮ:-** ಈ ಗ್ರಾಮದ ಕಟ್ಟಡಗಳ/ಆಸ್ತಿಗಳ ಭೂಸ್ವಾಧೀನ ಪ್ರಕ್ರಿಯೆಯು ಪ್ರಸ್ತಾವನೆ ಹಂತದಲ್ಲಿರುತ್ತದೆ. ಪುನರವಸತಿ ಕೇಂದ್ರಕ್ಕಾಗಿ ಲೋಕಾಪೂರ ಗ್ರಾಮದ ಜಮೀನು ಒಟ್ಟು ಕ್ಷೇತ್ರ 217.27 ಐತೀರ್ಪು ಆಗಿದೆ. ಹಾಗೂ ಪುನರವಸತಿ ಕೇಂದ್ರದ ವಿನ್ಯಾಸ ನಕ್ಷೆ ತಯಾರಿಸುವ ಹಂತದಲ್ಲಿದೆ. |

| | | |
|---|---|---|
| | | 5) ಭಂಟನೂರ ಗ್ರಾಮ:- ಈ ಗ್ರಾಮದ ಕಟ್ಟಡಗಳ/ಆಸ್ತಿಗಳ ಭೂಸ್ವಾಧೀನ ಪ್ರಕ್ರಿಯೆಯು ಆರ್.ಆರ್.ಎ.ಪಿ. ಹಂತದಲ್ಲಿರುತ್ತದೆ. ಪುನರವಸತಿ ಕೇಂದ್ರಕ್ಕಾಗಿ ಲೋಕಾಪೂರ ಹಾಗೂ ಚೌಡಾಪೂರ ಗ್ರಾಮದ ಜಮೀನು ಒಟ್ಟು ಕ್ಷೇತ್ರ 396.29 ಎ.ಗುಂ. ಪ್ರಸ್ತಾವನೆ ಹಂತದಲ್ಲಿದೆ.<br><br>ಈ ಪ್ರಕಾರ ಮುಳುಗಡೆಯಾಗುವ ಗ್ರಾಮಕ್ಕೆ ಹಾಗೂ ಪುನರವಸತಿ ಕೇಂದ್ರಕ್ಕೆ ಭೂಸ್ವಾಧೀನ ಪ್ರಕ್ರಿಯೆಯು ವಿವಿಧ ಹಂತಗಳಲ್ಲಿ ಚಾಲ್ತಿಯಲ್ಲಿದ್ದು, ನಿಯಮಗಳನ್ವಯ ಪುನರವಸತಿ ಸೌಲಭ್ಯ ಕಲ್ಪಿಸುವ ಕಾರ್ಯ ಪ್ರಗತಿಯಲ್ಲಿದೆ. |

ಸಂಖ್ಯೆ: ಜಸಂಇ 15 ಡಬ್ಲ್ಯೂಬಿಎಂ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ